# ಭಾಷೆ ನಮ್ಮ ಅಸ್ತಿತ್ವದ ಮೂಲ.

ಹೆಸರಾಂತ ವಿಜ್ಞಾನಿ ದಾರ್ಶನಿಕ ಮತ್ತು ಎಡಪಂಥೀಯ ಲೇಖಕನಾದ ನೋಆಮ್ ಚೋಮ್ಸ್ಕಿ ಭಾಷಾ ವಿಜ್ಞಾನಕ್ಕೆ ಸಂಬಂಧಪಟ್ಟ ಅನೇಕ ಕ್ರಾಂತಿಕಾರಿ ಸಿದ್ಧಾಂತಗಳನ್ನು ರೂಪಿಸಿದವನು. ಜೊತೆಗೆ ಭಾಷೆಯ ಬೆಳವಣಿಗೆ ಕುರಿತಾದ ಅವರ ಈ ಸಂದರ್ಶನ ವಿಜ್ಞಾನ ಪತ್ರಿಕೆ 'ಡಿಸ್ಕವರ್'' ನಲ್ಲಿ 2011ರ ನವೆಂಬರ್ 29ರಲ್ಲಿ ಪ್ರಕಟವಾಗಿತ್ತು. 'ಡಿಸ್ಕವರ್' ಪತ್ರಿಕೆಯ ವರದಿಗಾರರಾಗಿದ್ದ ಹೆನರಿ ರಾಸ್‌ರವರು ಈ ಮಾತುಕತೆಯನ್ನುನ್ನು ನಡೆಸಿಕೊಟ್ಟಿದ್ದರು. ಶ್ರೇಷ್ಠ ಪತ್ರಕರ್ತರಾದ ಆಶುತೋಷ ಉಪಾಧ್ಯಾಯ ಅವರು ಈ  ಸಂದರ್ಶನವನ್ನು ಅನುವಾದಿಸಿ ಕೊಟ್ಟಿರುತ್ತಾರೆ.

ತಮ್ಮ  ಈ ಸಂದರ್ಶನದಲ್ಲಿ ಚೋಮ್ಸ್ಕಿ ಅವರು ಮಾನವರ  ಬಳಿ ಇರುವ ಭಾಷೆಯು  ಒಂದು ಅಪೂರ್ವವಾದ (ಮಹತ್ವ ಪೂರ್ಣವಾದ) ಸಾಮರ್ಥ್ಯವಾಗಿದೆ ಎಂದು ಹೇಳುತ್ತಾರೆ. ಚೋಮ್ಸ್ಕಿ ಇದೇ ಸಂದರ್ಶನದಲ್ಲಿ ಭಾಷೆಗಳನ್ನು ಕುರಿತಾದ ಅಧ್ಯಯನದ ರೀತಿಗಳು(=ವಿಧಾನಗಳು) ಮತ್ತು ಸಮಯ ಕಳೆದ ಹಾಗೆ ಇವುಗಳಲ್ಲಿ ಆದ ಬದಲಾವಣೆಗಳ ಬಗ್ಗೆ ಮಾತನಾಡುತ್ತಿದ್ದಾರೆ. ಮಾನವ ಭಾಷೆಯ ಬಗ್ಗೆ  ಈಗ ಯಾವ ಬಗೆಯ( ತರಹೆಯ) ಪ್ರಶ್ನೆಗಳಿಗೆ ಉತ್ತರಗಳನ್ನು ಅವರು ಹುಡುಕುತ್ತಿರುವರೆಂದೂ, ಈ ಪ್ರಶ್ನೆಗಳೇಕೆ ಮಹತ್ವದ್ದಾಗಿವೆಯೆಂದೂ ತಿಳಿಸುತ್ತಾರೆ. ಅಷ್ಟಲ್ಲದೆ ಅವರು ಮಕ್ಕಳು ಕೆಲ ಭಾಷೆಯನ್ನು ಗಳಿಸಿಕೊಳ್ಳುವ ರೀತಿಯ ಬಗೆಗೂ(ಕುರಿತಾಗಿಯೂ) ಮಾತನಾಡುತ್ತಾರೆ. ಅವರು ಪ್ರತಿಯೊಂದು ಭಾಷೆ ಕೂಡ ಅಪೂರ್ವವಾದುದೆಂದು ತಿಳಿಸುತ್ತಾ ಭಾಷೆಗಳಲ್ಲಿ ಸಾಮ್ಯ (ಸಮಾನತೆಗಳು) ಇರುವುದನ್ನೂ ಹೇಳಿ ಅವರು ಭಾಷೆಗಳನ್ನು ಕುರಿತಂತೆ ಭಿನ್ನ ರೀತಿಯಲ್ಲಿ ಅವರು ಯೋಚನೆ  ಮಾಡಲು ಪ್ರೇರಿಸಿದ  ಸಂಗತಿ ಯಾವುದೆಂಬುದನ್ನು ಮತ್ತು, ಭಾಷೆಯನ್ನು ಕುರಿತಂತೆ  ಅವರ ಅಭಿಪ್ರಾಯಗಳಿಗೆ ವಿರುದ್ಧವಾಗಿ ಇದ್ದ ವಿಚಾರಗಳು ಯಾವುವು ಅವುಗಳ ಬಗ್ಗೆ ಇದ್ದ ಅವರ ತರ್ಕಗಳೇನು, ಐತಿಹಾಸಿಕ ವ್ಯಾಕರಣ ಮತ್ತು ವಿವರಣಾತ್ಮಕ ವ್ಯಾಕರಣದ ನಡುವಿನ ಅಂತರವೇನು, ಪ್ರಜನಕ (ಅಂದರೆ ಜನರೆಟೀವ್) ವ್ಯಾಕರಣ ಏನು ಹೇಳುತ್ತದೆ, ತಮ್ಮ (ಮಿದುಳಿಗೆ) ತಲೆಗೆ(ಯಲ್ಲಿ) ಇದು ಹೇಗೆ ಹೊಳೆಯಿತು? ಸಾರ್ವಭೌಮಿಕ ವ್ಯಾಕರಣದ ವಿಚಾರವೇನು? ಈವರೆವಿಗೂ ಉತ್ತರಿಸಲಾಗದಿರುವ ಪ್ರಶ್ನೆಗಳು ಯಾವುವು ಎಂಬುದನ್ನೆಲ್ಲಾ ಕುರಿತು ಸಂಕ್ಷೇಪವಾಗಿ  ಮಾತನಾಡುತ್ತಾರೆ.

ಶತ-ಶತಮಾನಗಳಿಂದಲೂ ವಿಶೇಷಜ್ಞರು ಪ್ರತಿಯೊಂದು ಭಾಷೆಯೂ ಬಹು (ಅತ್ಯಮೂಲ್ಯವಾ)ಅದ್ಭುತವಾದುದೆಂದು  ಒಪ್ಪುತ್ತಾ ಬಂದಿದ್ದಾರೆ. ನಂತರದಲ್ಲಿ 1956ರಲ್ಲಿ ಭಾಷಾ ವಿಜ್ಞಾನದ ಒಬ್ಬ ಯುವ ಪ್ರಾಧ್ಯಾಪಕರು(=ಆಚಾರ್ಯ) ಅಮೆರಿಕಾ ಶಿಕ್ಷಣ ಸಂಸ್ಥೆ ಮೆಸಾಚುಸೆಟ್ಸ್

ಇನ್‌ಸ್ಟಿಟ್ಯೂಟ್‌ಆಫ್ ಟೆಕ್ನಾಲಜಿ(ಎಮ್‌ಐಎಸ್‌ಟಿ) ಯಲ್ಲಿ ಸೂಚನಾ ಸಿದ್ಧಾಂತ ಕುರಿತು ಅಯೋಜಿಸಲಾಗಿದ್ದ ಒಂದು ವಿಚಾರ ಸಂಕಿರಣದಲ್ಲಿ ತಮ್ಮ ಐತಿಹಾಸಿಕ(ವಾದ) ಭಾಷಣ ನೀಡಿದರು. ಪ್ರತಿಯೊಂದು ಸಾರ್ಥಕ (ಅರ್ಥವತ್ತಾದ) ವಾಕ್ಯವೂ ತನ್ನ ಭಾಷಾ ನಿಯಮಗಳನ್ನಷ್ಟೇ ಪಾಲಿಸದೆ ಎಲ್ಲ ಭಾಷೆಗಳಿಗೂ ಅನ್ವಯವಾಗುವಂತಹ ಸಾರ್ವಭೌಮ ವ್ಯಾಕರಣವನ್ನು ಕೂಡಪಾಲಿಸುತ್ತದೆ.(ಅನುಸರಿಸುತ್ತದೆ). ಅಷ್ಟೇ ಅಲ್ಲ, (ಹಾಗೂ) ಮಕ್ಕಳು, ದೊಡ್ಡವರು ಮಾತನಾಡುವುದನ್ನು ಅನಕರಿಸಿ ಇಲ್ಲವೆ ತನ್ನ ಹೊರಗಣ ಪರಿಸರದಿಂದ (ಪರಿವೇಶದಿಂದ) ಭಾಷೆಯನ್ನು ಕಲಿಯುವ ಬದಲು ಭಾಷೆಯಲ್ಲಿ (ವಿಶೇಷಜ್ಞತೆಯನ್ನು) ನೈಪುಣ್ಯವನ್ನು ಸಾಧಿಸುವ ಆಂತರಿಕ ಸಾಮರ್ಥ್ಯದಿಂದ ಕೂಡಿರುತ್ತಾರೆ. ಜೈವಿಕ ವಿಕಾಸದಿಂದ ದೊರಕುವ ಈ ಶಕ್ತಿ ಮನುಷ್ಯರಿಗೆ ಮಾತ್ರ ಲಭ್ಯವಾಗಿರುತ್ತದೆ ಎಂಬ ಈ ಯುವ ಪ್ರಾಧ್ಯಾಪಕನ(ಆಚಾರ್ಯನ) ಕ್ರಾಂತಿಕರವಾದ ವಿಚಾರಗಳಿಂದಾಗಿ (ತಕ್ಷಣವೇ) ರಾತ್ರೋರಾತ್ರಿ ಭಾಷಾ ಚಿಂತಕರ ಅಭಿಪ್ರಾಯಗಳಲ್ಲಿ ಬದಲಾವಣೆ ಬರಲು ಶುರುವಾಯಿತು.

ಎವರಾಂ ನೋಅಮ್ ಚೋಮ್‌ಸ್ಕಿ ಡಿಸೆಂಬರ್ 7, 1928ರಲ್ಲಿ ಅಮೇರಿಕೆಯ ಫಿಲಿಡೆಲ್ಫಿಯಾನಲ್ಲಿ ಜನ್ಮ ತಾಳಿದ್ದ. ಆತನ ತಂದೆ ಚೆಸಿಯಮ್ ಚೋಮ್‌ಸ್ಕಿ ಹೀಬ್ರೂ ಭಾಷೆಯ ವಿದ್ವಾಂಸರಾಗಿದ್ದರು. ತಾಯಿ ಎಲ್ಸೀ ಸಿಮೋನೋಫಸ್ಕಿ ಕೂಡ ವಿದ್ವಾಂಸಳು ಮತ್ತು ಮಕ್ಕಳ ಪುಸ್ತಕಗಳ ಲೇಖಕಿ ಕೂಡಾ. . ನೋಮ್ ತನ್ನ ಬಾಲ್ಯ ಕಾಲದಲ್ಲೇ ಮಧ್ಯಕಾಲದ ಹೀಬ್ರೂ ವ್ಯಾಕರಣ ಕುರಿತು ಆತನ ತಂದೆ ಬರೆದಿದ್ದ ಹಸ್ತಪ್ರತಿ ಯನ್ನು ಓದಿಕೊಂಡಿದ್ದುದರಿಂದ ಮುಂದೆ ಆತನ ಕಾರ್ಯಕ್ಷೇತ್ರಕ್ಕೆ ಅದು ಬುನಾದಿ ಒದಗಿಸಿತು. ೧೯೫೫ರ ವೇಳೆಗಾಗಲೇ ಆತ ಎಂಐಇಟಿಯಲ್ಲಿ ಭಾಷಾ ವಿಜ್ಞಾನವನ್ನು ಅಧ್ಯಯನ ಮಾಡತೊಡಗಿದರು. ಅಲ್ಲಿ ಇದ್ದುಕೊಂಡೇ ಆತ ಭಾಷಾ ವಿಜ್ಞಾನ ಕುರಿತಾದ ಕ್ರಾಂತಿಕಾರಕ ಸಿದ್ಧಾಂತಗಳನ್ನು ಹುಟ್ಟು ಹಾಕಿದರು. ಇಂದಿಗೂ ನಮ್ಮನ್ನುನಾವು ಕಾಣುವ ರೀತಿಯನ್ನು ಕಉಕುರಿತು ಅವರು ಜೋಮ್‌ಸ್ಕಿಯವರು ಸವಾಲನ್ನೊಡ್ಡುತ್ತಾರೆ. “ಭಾಷೆ ನಮ್ಮ ಅಸ್ತಿತ್ವದ ಮೂಲ. ನಾವು ಪ್ರತಿ ಕ್ಷಣದಲ್ಲೂ ಭಾಷೆಯಲ್ಲಿ ಲೀನರಾಗಿರುತ್ತೇವೆ ಎಂದವರು ಹೇಳುತ್ತಾರೆ. ನಾವು ರಸ್ತೆಯಲ್ಲಿ ಓಡಾಡುತ್ತಿರುವಾಗ, ನಾವು ನಮ್ಮೊಂದಿಗೆ ನಿರಂತರ ಸಂವಾದ ನಡೆಸುತ್ತಿರುತ್ತೇವಾದುದರಿಂದ ಅದನ್ನು ತಡೆಯಲು (ಬಹಳ ಗಟ್ಟಿ ಮನಸ್ಸು) ಪ್ರಬಲ ಇಚ್ಛಾಶಕ್ತಿ ಬೇಕಾಗುತ್ತದೆ.” ಂಎಂದವರು ಹೇಳುತ್ತಾರೆ.

ತಮ್ಮನ್ನು ರಾಜಕೀಯದಿಂದ ಧೂರವಿಟ್ಟುಕೊಳ್ಳಲು (ಹೊರಗಿಡಲು) ಪ್ರಯತ್ನಪಡುವ ವಿಜ್ಞಾನಿಗಳ ಪರಂಪರೆಗೆ ವಿರುದ್ಧವಾಗಿ ಚೋಮ್‌ಸ್ಕಿ ರಾಜಕೀಯದಲ್ಲಿ ಮುನ್ನುಗ್ಗಿ ಭಾಗವಹಿಸಿದರು. ಅಮೇರಿಕಾ ವಿಯಟ್‌ನಾಂ ಮೇಲೆ ನಡೆಸಿದ ಆಕ್ರಮಣವನ್ನು ಅವರು ಕಟುವಾಗಿ ವಿರೋಧಿಸಿದರು.

1967ರಲ್ಲಿ ಪೆಂಟಾಗನ್ ವಿರೋಧಿಸಿದ ಮೊರ್ಚಾವನ್ನು ಸಜ್ಜುಗೊಳಿಸುವುದರಲ್ಲಿ ಸಹಾಯ ಮಾಡಿದರು. ಈ ಆಂದೋಳನದ ನಾಯಕರುಗಳನ್ನು ಬಂಧಿಸಿದಾಗ ಅವರಿಗೆ ಜೈಲಿನಲ್ಲಿ ಹೆಸರಾಂತ ಕಾದಂಬರಿಕಾರ ಜರ್ಮನ್ ಮೇಲರ್‌ನೊಡನೆ ಇಡಇರಿಸಲಾಗಿತ್ತು. ಮೇಲರ್ ತನ್ನ ಪುಸ್ತಕ 'ಆರ್ಮಿಸ್ ಆಫ್‌ದ ನೈಟ್'ನಲ್ಲಿ ಚೋಮ್‌ಸ್ಕಿಯನ್ನು ಒಬ್ಬ ನರಪೇತಲ, ಆದರೆ ತೀಕ್ಷ್ಣವಾದ ಅಂಗಾಂಗಗಳಿಂದ ಕೂಡಿದ ಒಂದು ವಿಶೀಷ್ಟ ಧ್ವನಿಯಿಂದ ಕೂಡಿದ ವ್ಯಕ್ತಿಯೆಂದು ವರ್ಣಿಸಿ ಸಜ್ಜನಿಕೆಯ ಹಾಗೂ ದೃಢವಾದ ನೈತಿಕ ಶಕ್ತಿಯ ಕಳೆಯಿಂದ ಕೂಡಿದವನೆಂದು ವರ್ಣಿಸುತ್ತಾನೆ.

ಇಲ್ಲಿ ಕೊಟ್ಟಿರುವ ಚೋಮ್‌ಸ್ಕಿಯೊಂದಿಗೆ ನಡೆಸಿದ ಸಂವಾದವು ಕನೆಕ್ಟೀಕಟ್‌ನ ಪತ್ರಕರ್ತ ಮೇರಿಆನ್‌ಲಾಂಗ್‌ನೊಡನೆ ಕುಳಿತು ನಡೆಸಿದ ಅನೇಕ ನಿಶ್ಚಿತವಾದ (ಖಚಿತವಾದ) ಸಂವಾದಗಳ ನಂತರ ಸಿದ್ಧಪಡಿಲಾದದ್ದು."ಅದು ಜಾ ಚಾಮ್‌ಸ್ಕಿಗೆ ಬಹಳ ಕಠಿಣವಾದ ಸಮಯವಾಗಿತ್ತು. ಆತನ ಪತ್ನಿ ತೀವ್ರವಾಗಿ ರೋಗ ಪೀಡಿತಳಾಗಿದ್ದಳಾಗಿದ್ದುದರಿಂದ ಆತ ಆಕೆಯ ಶುಶ್ರೂಷೆಯಲ್ಲಿ ತೊಡಗಿಕೊಂಡಿದ್ದರು. ಈ ಸಂವಾದ ನಡೆಯುವುದಕ್ಕೆ ಕೇವಲ ಹತ್ತು ದಿನಗಳಿಗೆ ಮೊದಲೇ ಆಕೆ ತೀರಿಕೊಂಡಳು. ಈ ದುರ್ಘಟನೆಯ ನಂತರದಲ್ಲಿ ಚೋಮ್‌ಸ್ಕಿಯೊಂದಿಗೆ ಈ ಸಂದರ್ಶನ ನಡೆಸಬೇಕಾಗಿ ಬಂತು. ಆದರೂ ಅವರು ಇದಕ್ಕೆ ಒಪ್ಪಿಕೊಂಡರು" ಎಂದು ಲಾಂಗ್ ಬರೆಯುತ್ತಾರೆ. ನಂತರದಲ್ಲಿ ಅವರು ಡಿಸ್ಕವರ್ ಪತ್ರಿಕೆ ವರದಿಗಳ ವೆಲರೀರಾಸ್ ನ ಅನೇಕ ಪ್ರಶ್ನೆಗಳಿಗೆ ಉತ್ತರ ನೀಡಿದರು. ಆ ಸಂದರ್ಶನದ ಕೆಲವಂಶಗಳನ್ನು ಇಲ್ಲಿ ನೀಡಲಾಗುತ್ತಿದೆ.

**ಪ್ರಶ್ನೆ:** ನೀವು ಮನುಷ್ಯನ ಭಾಷೆ ಕುರಿತಾಗಿ ಅದೊಂದು ಅಪರೂಪದ ಗುಣ ಎನ್ನುತ್ತೀರಿ. ಇದನ್ನು ವಿಶೇಷದ್ದಾಗಿ (ಅಪರೂಪದ್ದಾಗಿ) ಮಾಡುವ ಅಂಶ ಯಾವುದಾಗಿದೆ?.

**ಚಾಮ್‌ಸ್ಕಿ:** ಬೇರೆಯ ಪ್ರಾಣಿಗಳಿಗೂ ಮನುಷ್ಯನಿಗೂ ಅಂತರವಿದೆ. ಆ ದೃಷ್ಟಿಯಿಂದ ಮನುಷ್ಯರೆಲ್ಲ ಮೂಲತಃ ಒಂದೇ ಆಗಿರುತ್ತಾರೆ. ಅಮೇಜಾನ್‌ನ ಬೇಟೆಗಾರ(=ಶಿಕಾರಿ) ಸಂಗ್ರಾಹಕ ಆದಿವಾಸಿ ಸಮುದಾಯದ ಯಾವುದಾದರೂ ಮಗುವನ್ನು ಬಿಬಾಸ್ಟನ್‌ನಲ್ಲಿ ಸಾಕಿ ಸಲಹಿದರೆ ಅವನ ಭಾಷಾ ಸಾಮರ್ಥ್ಯಕ್ಕೆ ಸಂಬಂಧಿಸಿದ ವಿಚಾರದಲ್ಲಿ P ಇಲ್ಲಿ ಬೆಳೆದು ದೊಡ್ಡವರಾಗುತ್ತಿರುವ ನನ್ನ ಮಕ್ಕಳಿಗಿಂತ ಏನೊಂದು ಚೂರೂ(ಅಂತರ) ವ್ಯತ್ಯಾಸ ಇರುವುದಿಲ್ಲ. ಇದಕ್ಕೆ ವಿರುದ್ಧವಾದ ಪರಿಸ್ಥಿತಿಯಲ್ಲೂ ಇದೇ ಆಗುತ್ತದೆ. ಅಂದರೆ ಬಾಸ್ಟನ್‌ನ ಯಾವುದಾದರೂ ಬಾಲಕ ಅಮೇಜಾನ್‌ನ ಆದಿವಾಸಿಗಳ ನಡುವೆ ಬೆಳೆದು ದೊಡ್ಡವನಾದರ(=ದಾಲಿತ ಪೋಷಿತನಾದಾಗ) ಅಲ್ಲಿನ ಭಾಷೆ / ಉಪಭಾಷೆಯನ್ನವನು ಸಹಜವಾಗಿ ಮಾತನಾಡಲಾರಂಭಿಸುತ್ತಾನೆ. ಮನುಷ್ಯನಲ್ಲಿರುವ ಈ ವಿಶಿಷ್ಟ ಸಂಪತ್ತಿನ ಗಣಿ ನಮ್ಮೆಲ್ಲರ ಬಳಿಯೂ ಇರುವಂತಹುದೇ. ನಮ್ಮ ಸಂಸ್ಕೃತಿ ಮತ್ತು ನಮ್ಮ ಕಲ್ಪನಾಶೀಲ ಬೌದ್ಧಿಕ ಜೀವನದ ಬಹು ದೊಡ್ಡ ಭಾಗದ ಮೂಲಭೂತ ತತ್ವವಿದು.

ಆದುದರಿಂದಲೇ\ಇದರಿಂದಾಗಿಯೇ ನಾವು ಯೋಜನೆಗಳನ್ನು ಹಾಕಿಕೊಳ್ಳುತ್ತೇವೆ. ಸೃಜನಶೀಲ ಕಲೆಯ(ಕಾರ್ಯ=) ಕೆಲಸಗಳನ್ನು ಮಾಡುತ್ತೇನೆ. ಮತ್ತು ಜಟಿಲವಾದ ಸಮಾಜಗಳನ್ನು ನಿರ್ಮಿಸಿಕೊಳ್ಳುತ್ತೇವೆ.

**ಪ್ರಶ್ನೆ:** ಭಾಷೆಯ ಈ ಶಕ್ತಿ ಎಲ್ಲಿ, ಹೇಗೆ ಹುಟ್ಟಿತ್ತು?

**ಚಾಮ್‌ಸ್ಕಿ:** ನೀವು ಪುರಾತನ ದಾಖಲೆಗಳನ್ನು ನೋಡಿದಾಗ (ಸುಮಾರು ೧.೫ ಲಕ್ಷದಿಂದ ೭೫ ಸಾವಿರ ವರ್ಷಗಳ ಹಿಂದಿನ ಒಂದು ಚಿಕ್ಕ ಕಿಟಕಿಯಲ್ಲಿ ಸೃಜನಾತ್ಮಕ ವಿಸ್ಫೋಟವಾಗುತ್ತಿರುವಂತೆ ಕಾಣಿಸುತ್ತದೆ. ಆ ಕಾಲದಲ್ಲಿ ಆಕಸ್ಮಾತ್ತಾಗಿ ಹಸ್ತ ಶಿಲ್ಪಗಳು, ಪ್ರತೀಕಗಳನ್ನಾಧರಿಸಿದ ನಿರೂಪಣೆಗಳು, ಆಕಾಶದ ಘಟನೆಗಳ ಅಳತೆ ಮತ್ತು ಜಟಿಲವಾದ ಸಾಮಾಜಿಕ ಸಂರಚನೆಗಳಂತಹ ಸೃಜನಾತ್ಮಕ ಕಾರ್ಯಚಟುವಟಿಕೆಗಳು ಹೊರ ಮೂಡಿದ್ದು ಕಾಣಸಿಗುತ್ತದೆ. (ಪುರಾ)ಪ್ರಾಗೈತಿಹಾಸಿಕ ಕಾಲದ ಸುಮಾರು ಪ್ರತಿಯೊಬ್ಬ ವಿಶೇಷಜ್ಞನೂ ಈ ಘಟನೆಯನ್ನು ಭಾಷೆಯು ಇದ್ದಕ್ಕಿದ್ದಂತೆ (=ಆಕಸ್ಮಿಕವಾಗಿ) ಉದ್ಭವವಾದದ್ದರ ಜೊತೆ ತಳುಕುಹಾಕುತ್ತಾನೆ. ಈ ಘಟನೆಗೂ ಮನುಷ್ಯನ ಶಾರೀರಿಕ ಬದಲಾವಣೆಗಳಿಗೂ ಯಾವುದೇ ಸಂಬಂಧ ಇದ್ದಿರಬಹುದೆಂದನ್ನಿಸುವುದಿಲ್ಲ. ಆರು ಲಕ್ಷ ವರ್ಷಗಳ ಹಿಂದಿನ ಮನಷ್ಯನಂತೆಯೇ ಇಂದಿನ ಮನುಷ್ಯ ಕೂಡ ಮಾತನಾಡುತ್ತಾನೆ, ಕೇಳಿಸಿಕೊಳ್ಳುತ್ತಾನೆ. ಮಾತನಾಡುವ ಮತ್ತು ಕೇಳಿಸಿಕೊಳ್ಳುವ ತಂತ್ರಗಳು ಅಂದಿಗೂ ಇಂದಿಗೂ ಹಾಗೆಯೇ ಇವೆ. ಆದರೆ ಮನುಷ್ಯನಲ್ಲಿ ಹಿಂದೆಂದೂ ಇಲ್ಲದಿದ್ದ ಸಂಜ್ಞಾನಾತ್ಮಕ ಬದಲಾವಣೆಯಾಗಿದೆ. ಹಾಗೇಕೆಂದು ಯಯಾರಿಗೂ ಗೊತ್ತಿಲ್ಲ.

**ಪ್ರಶ್ನೆ:** ಮಾನವ ಭಾಷೆ ಕುರಿತು ನಿಮಗೆ ಅಭಿರುಚಿ ಹುಟ್ಟಿದ್ದು ಯಾವಾಗ?

**ಜಾಮ್‌ಸ್ಕಿ:** ಚಿಕ್ಕಂದಿನಿಂದ ನನಗೆ ನಮ್ಮ ತಂದೆಯಿಂದ ಆಧುನಿಕ ಹೀಬ್ರೂ ಸಾಹಿತ್ಯ ಮತ್ತು ಇತರ ಓದಿನ ಸಾಮಗ್ರಿಗಳು(=ವಸ್ತುಗಳು) ಸಿಕ್ಕವು. 1940ರ ಸುಮಾರಿನಲ್ಲಿ ಅವರಿಗೆ ಫಿಲಡೆಲ್ಫಿಯಾದ ಒಂದು ಹೀಬ್ರೂ ಸಂಸ್ಥೆಯಾದ ಡ್ರಾಪ್ಸೀ ಕಾಲೇಜಿನಿಂದ ಪಿಎಚ್.ಡಿ ಡಿಗ್ರಿ ದೊರಕಿತು. ಅವರು ಯಹೂದಿ ವಾದಿಗಳು ಮಧ್ಯಕಾಲದ ಹೀಬ್ರೂ ವ್ಯಾಕರಣ ಕುರಿತು ಅವರು ಕೆಲಸ ಮಾಡುತ್ತಿದ್ದರು. ನಾನು ನಮ್ಮ ತಂದೆಯ ಪುಸ್ತಕದ ಕರಡನ್ನು ಸರಿಯಾಗಿ (ಅಧಿಕಾರಿಕವಾಗಿ) ಓದಿದ್ದೇನೋ ಇಲ್ಲವೋ ಎಂದು ನನಗೆ ನೆನಪಿಲ್ಲ. ನಾನು ಓದಿದ್ದೆನೆಂಬುದಂತೂ ನಿಜ. ವ್ಯಾಕರಣ ಕುರಿತಾದ ಸಾಮಾನ್ಯ ತಿಳುವಳಿಕೆ ಒಂದು ಹಂತದ ವರೆಗೆ ಆ ಪುಸ್ತಕದಿಂದಾಗಿ ನನಗೆ ದೊರಕಿತು. ಆದರೆ ಅದಕ್ಕೂ ಹಿಂದೆ ವ್ಯಾಕರಣವೆಂದರೆ ಧ್ವನಿಗಳನ್ನು ವ್ಯವಸ್ಥಿತಗೊಳಿಸುವುದು, ಕಾಲವನ್ನು(tense) ತಿಳಿದುಕೊಳ್ಳುವುದು, ಈ ವಸ್ತುಗಳ್ನ P ಸೂಚಿ ತಯಾರಿಸುವುದು ಮತ್ತು ಇವು ಒಂದರೊಳಗೊಂದು ಹೇಗೆ ಸಮರಸಗೊ ಹೊಂದಿಕೊಳ್ಳುತ್ತವೆಂಬದನ್ನು ಕಂಡುಕೊಳ್ಳುವುದಾಗಿತ್ತು.

**ಪ್ರಶ್ನೆ:** ಭಾಷಾ ವಿಶೇಷಜ್ಞರು ಐತಿಹಾಸಿಕ ವ್ಯಾಕರಣ ಮತ್ತು ವಿವರಣಾತ್ಮಕ ವ್ಯಾಕರಣದ ನಡುವೆ ಅಂತರವನ್ನು ಮಾಡುತ್ತಾರೆ. ಇವೆರಡರ ನಡುವಣ ಅಂತರವೇನು?

**ಚಾಮ್‌ಸ್ಕಿ:** ಐತಿಹಾಸಿಕ ವ್ಯಾಕರಣದ ಅಧ್ಯಯನವೆಂದರೆ, ಸ್ವಲ್ಪ ಹೆಚ್ಚು ಕಡಿಮೆ ಆಧುನಿಕ ಇಂಗ್ಲೀಷ್ ಮಧ್ಯಕಾಲೀನ ಇಂಗ್ಲೀಷ್‌ನಿಂದ ವಿಕಾಸಗೊಂಡ ರೀತಿ ಎನ್ನಬಹುದು.. ಯಾವ ರೀತಿ ಅದು ಮಧ್ಯಕಾಲೀನ, ಪ್ರಾರಂಭಿಕ ಮತ್ತು ಹಳೆಯ ಇಂಗ್ಲಿಷಿನಿಂದ ವಿಕಾಸಹೊಂದಿತು ಮತ್ತು ಯಾವ ರೀತಿ ಅದು ಜರ್ಮೇನಿಕ್ ನಿಂದ ಮತ್ತು ಜರ್ಮೇನಿಕ್‌ನಾವು ಯಾವುದನ್ನು ಪ್ರೋಟೋ-ಇಂಡೋ ಯುರೋಪಿಯನ್ ಎನ್ನುತ್ತೇವೋ ಆ ಭಾಷಾ ಮೂಲದಿಂದ ಬೆಳವಣಿಗೆ ಹೊಂದಿತು, (ಎಂದದನ್ನು ಹೆಸರಿಸುತ್ತೇವಲ್ಲ ಹಾಗೆ.) ಅದನ್ನು ಯಾರೊಬ್ಬರೂ ಮಾತನಾಡುವುದಿಲ್ಲ. ಹಾಗಾಗಿ ಅದನ್ನು ಪುನಃ ರಚಿಸಬೇಕಾಗುತ್ತದೆ. ಕಾಲ ಕಳೆದಂತೆ ಭಾಷೆಗಳು ಬೆಳೆಯುವ ರೀತಿ, ಅವನ್ನು ಪುನಃ ರಚಿಸುವ ಒಂದು ಪ್ರಯತ್ನವಷ್ಟೇ. ನೀವು ಇದನ್ನು ಜೈವಿಕ ವಿಕಾಸ (Biological Evolution)ಕ್ಕೆ ಸಮಾನ ವಾಗಿ ಕಾಣಬಹುದು. ವಿವರಣಾತ್ಮಕ ವ್ಯಾಕರಣವೆಂದರೆ ಯಾವುದೇ ಸಮಾಜ ಅಥವಾ ನಿರ್ದಿಷ್ಟವಾದ ವ್ಯಕ್ತಿ-ವಿಶೇಷಕ್ಕಾಗಿ ± ಈಗಿರುವ ಭಾಷಾ ವ್ಯವಸ್ಥೆಯನ್ನು ತಿಳಿದುಕೊಳ್ಳುವ ಪ್ರಯತ್ನವಾಗಿರುತ್ತದೆ. ಈ ಅಂತರವನ್ನು ನೀವು ಜೈವಿಕ ವಿಕಾಸ ಹಾಗೂ ಮನೋವಿಜ್ಞಾನದ ನಡುವಿನ ಅಂತರವಾಗಿ ಕಾಣಬಹುದು.

**ಪ್ರಶ್ನೆ:** ಇನ್ನು ನಿಮ್ಮ ತಂದೆಯ ಕಾಲದ ಭಾಷಾತಜ್ಞರು(=ವಿಶೇಷಜ್ಞರು,) ಅವರೇನು ಮಾಡುತ್ತಿದ್ದರು?

**ಜಾಮ್‌ಸ್ಕಿ:** ಅವರು ಆಗ ವಾಸ್ತವ ಮಟ್ಟದಲ್ಲಿ ಬಳಕೆಮಾಡುತ್ತಿದ್ದ ಭಾಷಿಕ ವಿಧಿಗಳಿಗೆ(=ರೀತಿಗಳನ್ನು) ಸಂಬಂಧಿಸಿದಂತೆ ಕೆಲಸ ಮಾಡುತ್ತಿದ್ದರು. ಉದಾಹರಣೆಗಾಗಿ, ನೀವು ಚೆರೋಕಿ ಸಮುದಾಯದ ವ್ಯಾಕರಣ ಕುರಿತು ಕೆಲಸ ಮಾಡಲು ಇಷ್ಟಪಟ್ಟರೆ. ನೀವು ಆ ಸಮುದಾಯದ ನಡುವೆ ಹೋಗಿ ಅಲ್ಲಿ ಮಾತನಾಡುವವರಿಂದ ಸೂಚನೆಗಳನ್ನು ಸಂಗ್ರಹಿಸುವಿರಿ.

**ಪ್ರಶ್ನೆ:** ಆ ಭಾಷಾತಜ್ಞರು ಯಾವ ರೀತಿಯ ಪ್ರಶ್ನೆಗಳನ್ನು ಹಾಕುತ್ತಿದ್ದರು?

**ಜಾಮ್‌ಸ್ಕಿ:** ನೀವು ಚೈನಾದಿಂದ ಬಂದ ಮಾನವ ಶಾಸ್ತ್ರದ ಭಾಷಾ ತಜ್ಞರೆಂದಿಟ್ಟು ಕೊಳ್ಳಿ. ನೀವು ನನ್ನ ಭಾಷೆ ಕುರಿತು ಅಧ್ಯಯನ ಮಾಡಲಿಚ್ಛಿಸುತ್ತಿರೆಂದಿಟ್ಟುಕೊಳ್ಳೋಣ. ಮೊಟ್ಟಮೊದಲಿಗೆ ನಾನು ಮಾತನಾಡುವ ಧ್ವನಿಗಳನ್ನು ಕುರಿತು ನೀವು ತಿಳಿಯಲಿಚ್ಛಿಸುವಿರಿ, ನಂತರ ಇಷ್ಟು ಧ್ವನಿಗಳು ಒಟ್ಟಾಗಿ ಹೇಗೆ ಕೂಡುತ್ತವೆಂದು ತಿಳಿಯಲಿಚ್ಛಿಸುವಿರಿ. ನಾನು 'ಬ್ನಿಕ್' ಎಂದು ಹೇಳದೆಯೋ ಬ್ಲಿಕ್ ಎಂದೇಕೆ ಹೇಳುವೆನೆಂದೂ, ಈ ಧ್ವನಿಗಳನ್ನು ಹೇಗೆವ್ಯವಸ್ಥಿತಗೊಳಿಸಲಾಗುತ್ತದೆಂದೂ ಕೇಳುವಿರಿ?

ಕ್ರಿಯಾಪದದಲ್ಲಿ ಭೂತಕಾಲವು ಇರುವುದೆ? ಇದ್ದಲ್ಲಿ ಅದು ಕ್ರಿಯೆಯ ನಂತರ ಬರುತ್ತದೆಯೋ, ಅಥವಾ ಮೊದಲೇ ಬರುತ್ತದೆಯೋ? ಅಥವಾ ಇದು ಯಾವುದೇ ಬೇರೆಯ ವಸ್ತುವೇ? ಇದೇ ರೀತಿ ನೀವು ಎಷ್ಟೋ ಪ್ರಶ್ನೆಗಳನ್ನು ಕೇಳುತ್ತಾ ಹೋಗುತ್ತೀರಿ?

**ಪ್ರಶ್ನೆ:** ಆದರೆ ನೀವು ಈ ದೃಷ್ಟಿಯನ್ನು ಒಪ್ಪುತ್ತಿರಲಿಲ್ಲವೇಕೆ?

**ಚಾಮ್ಸ್ಕಿ:** ನಾನು ಆಗ ಪೆನ್ ವಿಶ್ವವಿದ್ಯಾನಿಲಯದಲ್ಲಿದ್ದೆ. ನನ್ನ ಪದವಿಯ(=ಗ್ರಾಜುಯೇಟ್) ಥೀಸಿಸ್‌ನ ಶೀರ್ಷಿಕೆ - ವ್ಯಾವಹಾರಿಕ (=ಆಡುಮಾತಿನ) ಹೀಬ್ರೂನ ಆಧುನಿಕ ವ್ಯಾಕರಣ ಎಂದಾಗಿತ್ತು. ನನಗೆ ಈ ಭಾಷೆ ಸಾಕಷ್ಟು ಚೆನ್ನಾಗಿ ಬರುತ್ತಿತ್ತು. ಆ ಕಾಲದಲ್ಲಿ ನಮಗೆ ಪಾಠ ಹೇಳುತ್ತಿದ್ದ ರೀತಿಯಲ್ಲೇ ನಾನು ಕೂಡ ಅದರ ಬಗ್ಗೆ ಕೆಲಸ ಮಾಡ ೀಲಾರಂಭಿಸಿದೆ. ನನಗೆ ಒಂದು ಹೀಬ್ರೂ ಭಾಷೆಯ (ಕೈಪಿಡಿ)ಖಬರೀ ದೊರಕಿತು. ಅದರಿಂದ ನಾನು ಪ್ರಶ್ನಿಸತೊಡಗಿದೆ. ನನಗೆ ಇದರಿಂದಾಗಿ ಅಂಕಗಳು ದೊರೆತವು. ನನಗೆ ಇದ್ದಕ್ಕಿದ್ದಂತೆ ಇದೆಂಥ ಮೂರ್ಖತನ ಎನಿಸಿತು. ನನಗೆ ಮೊದಲೇ ಉತ್ತರ ಗೊತಿರುವಂಥ .ಪ್ರಶ್ನೆಗಳನ್ನು ಕೇಳುತ್ತಿದ್ದೇನೆನಿಸಿತು.

**ಪ್ರಶ್ನೆ:** ನೀವು ಅತಿ ಶೀಘ್ರದಲ್ಲೇ ಭಾಷಾ ವಿಜ್ಞಾನದಲ್ಲಿ ನಿಮ್ಮ ಸಂಶೋಧನೆಯ ಅತಿ ನವೀನ ಕ್ರಮವನ್ನು ವಿಕಸಿತಗೊಳಿಸಿಕೊಂಡಿರಿ. ಈ ತೆರನಾದ ವಿಚಾರಗಳು ಹುಟ್ಟಿದ್ದು ಹೇಗೆ?

**ಚಾಮ್ಸ್ಕಿ:** ಇದಕ್ಕೂ ಮೊದಲು ೧೯೫೦ ರಲ್ಲಿ, ಆಗ ನಾನು ಹಾರ್ವರ್ಡ್ ವಿಶ್ವವಿದ್ಯಾಲಯದ ವಿದ್ಯಾರ್ಥಿಯಾಗಿದ್ದಾಗ, ಭಾಷೆ ಕುರಿತಂತೆ ಇದ್ದ ಒಂದು ಸಾಮಾನ್ಯ ಧೋರಣೆ ಎಂದರೆಇತರೆ ಮಾನವ ಚಟುವಟಿಕೆಗಳಂತೆ ಭಾಷೆ ಕೂಡ ಕಲಿಯುವ ಅಭ್ಯಾಸಗಳ ಒಂದು ಸಂಗ್ರಹ; ಸಾಕು ಪ್ರಾಣಿಗಳಿಗೆ ತರಬೇತಿ ನೀಡುವ ಹಾಗೆಯೇ ಇದನ್ನು ಕಲಿಸಲಾಗುತ್ತದೆ ಎಂಬ ಭಾವನೆ ಇತ್ತು. ಅಂದರೆ ಪ್ರಬಲೀಕರಣದ (Reinforcement) ಮೂಲಕ ಎಂದು. ಆ ಕಾಲದಲ್ಲಿ ಈ ತೆರನಾದ ಭಾವನೆ ಒಂದು ಕುರುಡು ನಂಬಿಕೆಯ ಹಾಗೆ ವ್ಯಾಪಿಸಿತ್ತು. ಆದರೆ ನಾವು ಇಬ್ಬರು-ಮೂವರು ಮಾತ್ರ ಈ ವಿಚಾರವನ್ನು ಒಪ್ಪುತ್ತಿರಲಿಲ್ಲ. ನಾವುಗಳು ಸಂಗತಿಗಳನ್ನು ಬೇರೆಯದೇ ರೀತಿಯಲ್ಲಿ ನೋಡತೊಡಗಿದೆವು.

ವಿಶೇಷವಾಗಿ ನಾವು ಕೆಲವು ತಳಹದಿ ರೂಪದ(=ಆರಂಭಿಕ) ಸತ್ಯಗಳತ್ತ ಲಕ್ಷ್ಯ ವಹಿಸಿದೆವು. ಪ್ರತಿಯೊಂದು ಭಾಷೆಯೂ ಅಸಂಖ್ಯವಾದ ಸುವ್ಯವಸ್ಥಿತ ಅಭಿವ್ಯಕ್ತಿಗಳನ್ನುರೂಪಿಸುವ ಮತ್ತು ಪ್ರಕಟಿಸುವ ಒಂದು ಮಾಧ್ಯಮ. ಅದರಲ್ಲಿ ಪ್ರತಿಯೊಂದು ಅಭಿವ್ಯಕ್ತಿಯ ಒಂದು ಅರ್ಥಪೂರ್ಣ ವ್ಯಾಖ್ಯಾನ ಮತ್ತು ಧ್ವನ್ಯಾತ್ಮಕ ರೂಪವಿದೆ.ಆದುದರಿಂದ ನಾವದನ್ನು ಪ್ರಜನಕವಾದ ಕ್ರಿಯೆ (generative procedure) ಎನ್ನುತ್ತೇವೆ. ಹಾಗೆಂದರೆ ಅಸಂಖ್ಯವಾದ ವಾಕ್ಯಗಳು / ಅಭಿವ್ಯಕ್ತಿಗಳನ್ನು ಹುಟ್ಟುಹಾಕುವ ಹಾಗೂ ಅವುಗಳನ್ನು ನಮ್ಮ ಚಿಂತನಾ

ಕ್ರಮ ಮತ್ತು ಸ್ನಾಯು ತಂತ್ರದೊಂದಿಗೆ ಜೋಡಿಸುವ ಸಾಮರ್ಥ್ಯ. ಪ್ರತಿಯೊಂದು ಬಾರಿಯೂ ನಾವು ಈ ಕೇಂದ್ರೀಯ ಗುಣವನ್ನು ಗಮನಿಸುತ್ತಾ ಆರಂಭಿಸಬೇಕಾಗುತ್ತದೆ. ವ್ಯವಸ್ಥಿತವಾದ ಅಭಿವ್ಯಕ್ತಿಗಳನ್ನು ಮತ್ತು ಅವುಗಳ ಅರ್ಥಗಳನ್ನು ತಡೆಯಿಲ್ಲದಂತೆ ಉತ್ಪಾದಿಸುವ ಗುಣ. ನಮ್ಮ ಈ ವಿಚಾರಗಳುಗಳು ನಂತರದಲ್ಲಿ ಸಿದ್ಧಾಂತವಾಗಿ ರೂಪುಗೊಂಡವು. ಅದನ್ನು ನಾವಿಂದು ª ಭಾಷಿಕ ರೂಪುರೇಷೆ (biolinguistic frame work) ಎಂದು ಕರೆಯುತ್ತೇವೆ. ಈ ಸಿದ್ಧಾಂತವು ಭಾಷೆಯನ್ನು £ ನಮ್ಮ ದೃಷ್ಟಿ ತಂತ್ರದ ಹಾಗೆಯೇ ಹಾಗೆಯೇ ಮಾನವ ಜೀವ ವಿಜ್ಞಾನದ ಒಂದು ತತ್ವ ಎಂದು ಪರಿಗಣಿಸುತ್ತದೆ.

**ಪ್ರಶ್ನೆ:** ಎಲ್ಲ ಮನುಷ್ಯರಲ್ಲೂ ಒಂದು ಸಾರ್ವತ್ರಿಕ ವ್ಯಾಕರಣ, ಸಾರ್ವಭೌಮಿಕ ವ್ಯಾಕರಣವಿರುತ್ತದೆ ಎಂಬುದು ತಮ್ಮ ಸಿದ್ಧಾಂತ. ಹಾಗೆಂದರೇನು?

**ಚಾಮ್‌ಸ್ಕಿ:** ಇದರ ಆಶಯಮನುಷ್ಯನ ಭಾಷೆಯ ಸಾಮರ್ಥ್ಯ ಆನುವಂಶಿಕ ಬೇರುಗಳಿಗೆ ಸೇರಿದ್ದು ಎನ್ನುವುದು.(ಭಾಷೆ ಮನುಷ್ಯರಲ್ಲಿ) ಅನುವಂಶಿಕವಾಗಿ ಮೂಡಿ ಬರುವ ಸಾಮರ್ಥ್ಯ A ಎಂದರ್ಥ.) ನೀವು ನಿಮ್ಮ ಕೊನೆಯ ವಾಕ್ಯವನ್ನು ಗಮನಿಸಿ ನೋಡಿ, ಇದು ಧ್ವನಿಗಳು ಯಾವುದೇ ಒಳ್ಳೆಯ ಕ್ರಮವಿಲ್ಲದ ರೀತಿ ಅಲ್ಲ. ಅರ್ಥಾತ್ ಇದು ಧ್ವನಿಗಳ ಅವ್ಯವಸ್ಥಿತ ರೀತಿ ಅಲ್ಲ. ನೀವು ಪದಗಳ ನಿಶ್ಚಿತ ಸ್ವರೂಪವೊಂದನ್ನು (=ಆಕೃತಿಯೊಂದನ್ನು) ಮೂಡಿಸಿದ್ದೀರಿ. ಹಾಗೂ ಇವಕ್ಕೊಂದು ಅತ್ಯಂತ ವಿಶಿಷ್ಟ ಭಾಷಿಕ ಅರ್ಥವಿದೆ. ಇದಕ್ಕೊಂದು ನಿಶ್ಚಿತಾರ್ಥವಿದೆ. ಬೇರೆ ಯಾವ ಅರ್ಥವೂ ಇಲ್ಲ. ಹಾಗೂ ಇದಕ್ಕೊಂದು ನಿಶ್ಚಿತವಾದ ಧ್ವನಿ ಎಂಬುದಿದೆ. ಬೇರೆ ಯಾವ ಧ್ವನಿಯೂ ಇಲ್ಲ. ನೀವಿದ್ದನ್ನು ಮಾಡಿದ್ದು ಹೇಗೆಂದು ಹೇಳಿ. ಇಲ್ಲಿ ಎರಡು ಸಾಧ್ಯತೆಗಳಿರಲು ಸಾಧ್ಯ. ಒಂದು ಇದನ್ನೊಂದು ಚಮತ್ಕಾರವೆಂದು ಭಾವಿಸಬೇಕು. ಇಲ್ಲವೇ ನಿಮ್ಮಲ್ಲಿ ನಿಯಮಗಳ ಒಂದು ಆಂತರಿಕವಾದ ವ್ಯವಸ್ಥೆ ಇದೆಯೆಂದೂ ಅದು ಪದಗಳ ಸ್ವರೂಪ ಹಾಗೂ ಅವುಗಳ ಅರ್ಥವನ್ನು ಖಚಿತಗೊಳಿಸುತ್ತದೆಯೆಂದು ತಿಳಿಯಬೇಕು. ಇದೊಂದು ಚಮತ್ಕಾರದ ಕೊಡುಗೆ ಎಂದು ನಾನಂತೂ ಭಾವಿಸುವುದಿಲ್ಲ.

**ಪ್ರಶ್ನೆ:** ಭಾಷಾವಿಜ್ಞಾನವನ್ನು ಕುರಿತಾದ ನಿಮ್ಮ ಚಿಂತನೆಗಳ ಆರಂಭದ ಹಂತದಲ್ಲಿ ಯಾವ ತೆರನಾಗಿ ಪ್ರತಿಕ್ರಿಯಿಸಿದರು?

**ಚಾಮ್‌ಸ್ಕಿ:** ಆರಂಭದಲ್ಲಿ ಹೆಚ್ಚು ಮಂದಿ ನಮ್ಮ ಅಭಿಪ್ರಾಯಗಳನ್ನು ತಿರಸ್ಕರಿಸಿದರು, ಇಲ್ಲವೆ ಉಪೇಕ್ಷಿಸಿದರು. ಅದು ವ್ಯಾವಹಾರಿಕ (behavioural science) ಭಾಷಾ ವಿಜ್ಞಾನದ ಕಾಲವಾಗಿತ್ತು. ಅದು ಮಾನವ ಚಟುವಟಿಕೆಗಳು ಮತ್ತು ವ್ಯವಹಾರಗಳ ಅಧ್ಯಯನವಾಗಿತ್ತು. ಅದರಲ್ಲಿ ವ್ಯವಹಾರಗಳ ಮೇಲೆ ನಿಯಂತ್ರಣ ಹಾಗೂ ರೂಪಾಂತರಣವನ್ನು ಜೋಡಿಲಾಗುತ್ತಿತ್ತು. ಇದನ್ನು

ವ್ಯವಹಾರವಾದ (behaviourism) ಎಂದು ಹೇಳುತ್ತಾರೆ. ಅದರಂತೆ ನೀವು ವ್ಯಕ್ತಿಯನ್ನು ನಿಮಗಿಷ್ಟ ಬಂದಂತೆ ಬದಲಾಯಿಸಬಹುದು; ನೀವು ಆತನ ಪರಿಸರ(=ವಾತಾವರಣ) ಅಥವಾ ಅವನ ತರಬೇತಿಯನ್ನು ಸರಿಯಾಗಿ / ವ್ಯವಸ್ಥೆಗೊಳಿಸುವುದಾದರೆ ಮಾತ್ರ./ ಮನುಷ್ಯನನ್ನು ರೂಪಿಸುವುದರಲ್ಲಿ ಅನುವಂಶಿಕ ಘಟಕವೆಂಬುದು ಅತಿ ಮುಖ್ಯವಾದ ಪಾತ್ರವಹಿಸುತ್ತದೆ. ಇದು ಅಪರಿಚಿತವಾದದ್ದೆಂದು ಹೇಳಿ ಹಗುರವಾಗಿ ತೆಗೆದುಕೊಳ್ಳಲಾಯಿತು. ಅನಂತರದಲ್ಲಿ ಅನ್ಯಧರ್ಮೀಯನಾದ ನನ್ನ ಈ ವಿಚಾರಗಳನ್ನು ಒಳಗಿನಿಂದ ಹುಟ್ಟಿದ ಪ್ರಕಲ್ಪನೆ ಎಂದು ಹೆಸರಿಸಿ ಇದನ್ನು ನಿಂದಿಸುವ ರಾಶಿ ರಾಶಿ ಸಾಹಿತ್ಯ ರಚಿಸಲಾಯಿತು. ಇಂದಿಗೂ ನೀವು ಪ್ರಮುಖ ಸಂಶೋಧನ

ಪತ್ರಿಕೆಗಳಲ್ಲಿ 'ಭಾಷೆಯು ಕೇವಲ ಸಂಸ್ಕೃತಿ, ಪರಿಸರ ಮತ್ತು ತರಬೇತಿಯ ಪರಿಣಾಮವಾಗಿ ಹುಟ್ಟಿದ್ದು' ಎಂಬಂಥ ಸೂತ್ರ ವಕ್ಯಗಳನ್ನು ಓದಬಹುದು. ಒಂದು ರೀತಿಯಲ್ಲಿ ಈ ಧೋರಣೆಯನ್ನು ನಮ್ಮ ಸಹಜಬೋಧೆಯ ಭಾಗವಾಗಿ ಮಾಡಲಾಗಿದೆ. ನಾವೆಲ್ಲರೂ ಬಾಷೆಯನ್ನು ಅದು ಎಷ್ಟೇ ಕಷ್ಟವಾಗಿದ್ದರೂ ಕಲಿಯುತ್ತೇವೆ. ಪರಿಸರವೂ ತನ್ನ ಪ್ರಬಾವ ಬೀರುತ್ತದೆಂಬುದನ್ನು ನಾವು ಕಂಡುಕೊಳ್ಳುತ್ತೇವೆ.

ಇಂಗ್ಲೆಂಡಿನಲ್ಲಿ ಹುಟ್ಟಿ ಬೆಳೆಯುವವರು ಇಂಗ್ಲಿಷ್ ಮಾತನಾಡುತ್ತಾರೆ; ಆದರೆ ಸ್ವಾಹಿಲಿ ಭಾಷೆಯನ್ನಲ್ಲ. ವಾಸ್ತವ ಸಿದ್ಧಾಂತಗಳು ನಮ್ಮ ಪ್ರಜ್ಞೆಯ ತನಕ ತಲುಪಲಾರವು. ನಾವು ನಮ್ಮ ಆಂತರ್ಯದೊಳಕ್ಕೆ ಇಣುಕಿ ನಮ್ಮ ಭಾಷಿಕ ವ್ಯವಹಾರಗಳನ್ನು ನಿರ್ಧರಿಸುವ ಆ ರಹಸ್ಯ(=ಅಡಗಿರುವ) ಸಿದ್ಧಾಂತಗಳನ್ನು ನೋಡಲಾರೆವು. ನಮ್ಮ ಶರೀರವನ್ನು ಅಲುಗಾಡಿಸಲು ಅನುಮತಿ ನೀಡುವ ಸಿದ್ಧಾಂತಗಳನ್ನೂ ನೋಡಲಾರೆವು. ಇದು ಒಳಗಿಂದೊಳಗೇ ನಡೆಯುತ್ತಿರುತ್ತದೆ.

**ಪ್ರಶ್ನೆ:** ಭಾಷಾ ವಿಜ್ಞಾನಿಗಳು ಈ ರಹಸ್ಯ ಸಿದ್ಧಾಂತಗಳನ್ನು ಹೇಗೆ ಕಂಡುಕೊಳ್ಳುತ್ತಾರೆ?

**ಚಾಮ್‌ಸ್ಕಿ:** ನೀವು ಅಂಕಿಸಂಖ್ಯೆಗಳನ್ನು ಸಂಗ್ರಹಿಸಿ ಯಾವುದೇ ಭಾಷೆಯ (ವಿಚಾರವಾಗಿ=) ಬಗ್ಗೆ ತಿಳುವಳಿಕೆ ಪಡೆಯಬಹುದಾಗಿದೆ. ಉದಾಹರಣೆಗಾಗಿ ನನ್ನ ಭಾಷೆಯನ್ನು ಅಧ್ಯಯನ ಮಾಡುತ್ತಿರುವ ಚೈನಾ ದೇಶದ ಭಾಷಾವಿಜ್ಞಾನಿ ನನ್ನನ್ನು ಪ್ರಶ್ನಿಸಿ ಉತ್ತರಗಳನ್ನು ಸಂಗ್ರಹಿಸಬಹುದಾಗಿದೆ. ಅದು ಒಂದು ರೀತಿ ಮಾಹಿತಿ ಸಂಗ್ರಹ ಆಗುತ್ತದೆ. ಇನ್ನೊಂದು ರೀತಿಯಲ್ಲಿ ನಾನು ಮೂರು ದಿನಗಳ ಕಾಲ ಒಂದೇ ಸಮನೆ ಏನೇನು ಮಾತನಾಡುತ್ತೇನೋ ಅದನ್ನು ಟೇಪ್ ಮಾಡಿಕೊಳ್ಳುತ್ತಿರಬಹುದು. ಮತ್ತು ಯಾವುದೇ ಭಾಷೆಯನ್ನು ಕಲಿಯುವಾಗ ಮತ್ತು ಅದನ್ನು ಪ್ರಯೋಗಿಸಿದಾಗ ಬಳಸುವಾಗ ಮೆದುಳಿನಲ್ಲಿ ನಡೆಯುತ್ತಿರುವುದನ್ನೆಲ್ಲ ಅಧ್ಯಯನ ಮಾಡಿ ನೀವು ಆ ಭಾಷೆಯನ್ನು ಕುರಿತಂತೆ ಪರೀಕ್ಷೆ ನಡೆಸಬಹುದು. ಉದಾಹರಣೆಗೆ ನೀವು ಈಗ ನಾನು ರಚಿಸುತ್ತಿರುವ ವಾಕ್ಯಗಳ ಅರ್ಥವನ್ನು ಹೊರತೆಗೆಯಲು ಮತ್ತು ಅವುಗಳನ್ನು ತಿಳಿದುಕೊಳ್ಳಲು

ಅಥವಾ ನಿಮ್ಮ ವಾಕ್ಯಗಳನ್ನು ರಚಿಸಲು ಬಳಸಲಾಗುತ್ತಿರುವ ಆ ನಿಯಮಗಳು ಮತ್ತು ಸಿದ್ಧಾಂತಗಳನ್ನು ಇಂದಿನ ಭಾಷಾ ವಿಜ್ಞಾನಿಗಳು ಗಮನಿಸುವ ಪ್ರಯತ್ನ ಮಾಡಬೇಕು. ಹಾಗೂ

**ಪ್ರಶ್ನೆ:** ಇದು ನೀವು ಈಗಾಗಲೇ ತಿರಸ್ಕರಿಸಿರುವ(=ತ್ಯಜಿಸಿರುವಂತಹ) ಹಳೆಯ ವ್ಯಾಕರಣದ ಸಿದ್ಧಾಂತಗಳ ಮಾದರಿಯಲ್ಲಿಲ್ಲವೇನು?

**ಚಾಮ್‌ಸ್ಕಿ:** ಇಲ್ಲ.ವ್ಯಾಕರಣ ಕುರಿತಾದ ಪರಂಪರಾಗತವಾದ ಅಧ್ಯಯನದಲ್ಲಿ ನೀವು ಪದಗಳನ್ನು ರಚಿಸುವ ಕ್ರಮದ ಕಡೆ ಗಮನ ಹರಿಸುವಿರಿ. ಕೆಲಮಟ್ಟಿಗೆ ವಾಕ್ಯ ರಚನೆಯ ಕಡೆಗೂ ಗಮನವಿಡುವಿರಿ. ಕಳೆದ ೫೦ ವರ್ಷಗಳಲ್ಲಿ ನೀವು ಪ್ರಜನಕ ಭಾಷಾ ವಿಜ್ಞಾನ (Generative Linguistics) ನದಲ್ಲಿ ಉದಾಹರಣೆಗೆ-ಪ್ರತಿಯೊಂದು ಭಾಷೆಗೆ ಸಂಬಂಧಿಸಿದಂತೆ ವ್ಯವಸ್ಥಿತವಾದ ಅಭಿವ್ಯಕ್ತಿಗಳ ಅಸಂಖ್ಯಾತ ಸರಪಳಿಗಳನ್ನು (ಶೃಂಖಲೆ) ನಿರ್ಣಯಿಸುವ ನಿಯಮಗಳು ಮತ್ತು ಸಿದ್ಧಾಂತಗಳ ಆ ತಂತ್ರ ಯಾವುದು ಎಂದು ನೀವು ಕೇಳುತ್ತಿದ್ದೀರಿ. ಇದರ ನಂತರ ನೀವು ಅವುಗಳನ್ನು ಒಂದು ನಿಶ್ಚಿತ ವ್ಯಾಖ್ಯಾನದಿಂದ ಜೋಡಿಸುತ್ತೀರಿ.

[ಪ್ರತಿಯೊಂದು ಭಾಷೆಗೂ ಇರುವ ನಿಯಮ ಹಾಗೂ ಸಿದ್ಧಾಂತಗಳು ಯಾವುವು, ಅದರ ಯಾವ ತಂತ್ರ ಅಸಂಖ್ಯ ಅಭಿವ್ಯಕ್ತಿಗಳನ್ನು ನಿರ್ಣಯಿಸುವುದೆಂದು ಒಂದು ವೇಳೆ ನೀವು ಪ್ರಶ್ನಿಸುವಿರೆಂದಿಟ್ಟುಕೊಂಡರೆ ನೀವು ನಂತರದಲ್ಲಿ ಅವನ್ನ ಒಂದು ನಿಶ್ಚಿತವಾದ ವ್ಯಾಖ್ಯೆಯೊಂದಿಗೆ ಅದನ್ನು ಜೋಡಿಸಲಾಗುತ್ತದೆ.}

**ಪ್ರಶ್ನೆ:** ಭಾಷೆ ಕುರಿತಂತಹ ನಮ್ಮ ತಿಳುವಳಿಕೆಯೊಂದಿಗೆ ನಮ್ಮ ಮೆದುಳಿನ ಕಾಂತಿ ಸೇರಿಕೊಂಡಿದೆಯೇ?

**ಚಾಮ್‌ಸ್ಕಿ:** ಮಿಲಾನಿನ(ಇಟಲಿಯ ಒಂದು ನಗರ) ಒಂದು ಸಮೂಹವು ಇತ್ತೀಚೆಗೆ ಭಾಷೆಯೊಂದಿಗೆ ನಡೆಯುವ ನಮ್ಮ ಮಿದುಳಿನ ª(ದ ಚಟುವಟಿಕೆಗಳನ್ನು ಕುರಿತಾದ ಒಂದು ಆಕರ್ಷಕ ಅಧ್ಯಯನವನ್ನು ನಡೆಸಿದ್ದಾರೆ. ಅವರುಗಳು ತಮ್ಮ ಸಶೋಧನ ವಿದ್ಯಾರ್ಥಿಗಳಿಗೆ ನಿರರ್ಥಕವಾದ ಭಾಷೆಗಳ ಎರಡು ತೆರನಾದ ಸಾಮಗ್ರಿಗಳನ್ನು ನೀಡಿದರು. ಅವುಗಳಲ್ಲೊಂದು ಪ್ರತೀಕಾತ್ಮಕ ಭಾಷೆಯಾಗಿತ್ತು. ವಿದ್ಯಾರ್ಥಿಗಳಿಗೆ ಇಟಾಲಿಯನ್ ಭಾಷೆ ಗೊತ್ತಿಲ್ಲದಿದ್ದಾಗ್ಯೂ ಅದನ್ನು ಇತಾಲನಿ ಭಾಷೆಯ ನಿಯಮಗಳ ಉಲ್ಲಂಘಿ ಆಧಾರದ ಮೇಲೆಸಿದ್ಧಪಡಿಸಿದ್ದರು. ಇನ್ನೊಂದನ್ನು ಸಾರ್ವಭೌಮಿಕ ಭಾಷೆಯ ನಿಯಮಗಳನ್ನು ಉಲ್ಲಂಘಿಸಿ ಸಿದ್ಧಪಡಿಸಲಾಗಿತ್ತು. ಒಂದು ವಿಶೇಷ ಸಂದರ್ಭದಲ್ಲಿ ನೀವು ಆ ಯಾವುದಾದರೂ ವಾಕ್ಯವನ್ನು ತಿರಸ್ಕರಿಸಲಿಚ್ಛಿಸಿದಿರೆಂದಾದರೆ 'ಜಾನ್ ಇಲ್ಲಿರಲಿಲ್ಲ. ಜಾನ್ ಅಲ್ಲಿ ಇರಲಿಲ್ಲ. ಹೀಗೆ. ಭಾಷೆಗಳಲ್ಲಿ ಕೆಲವೇ ನಿರ್ದಿಷ್ಟ ವಿಷಯಗಳನ್ನು ಮಾಡಲು ನಿಮಗೆ

ಅನುಮತಿ ನೀಡಲಾಗುತ್ತದೆ. ನೀವು 'ಇಲ್ಲ' (ನಿಷೇಧಾರ್ಥಕ) ಶಬ್ದವನ್ನು ಕೆಲವು ಕಡೆ ಇಟ್ಟುಕೊಳ್ಳಬಹುದು, ಆದರೆ ನೀವು ಅದನ್ನು ಇನ್ನು ಕೆಲವು ಕಡೆ ಇಟ್ಟುಕೊಳ್ಳಲಾಗುವುದಿಲ್ಲ. . ಆದುದರಿಂದ ಮನಸೋ ಇಚ್ಛೆಯಂತೆ ರಚಿಸಿದ ಭಾಷೆಯಲ್ಲಿ ನಿಷೇಧಿಸುವ ತತ್ವವನ್ನು ಸ್ವೀಕರಿಸುವ ಸ್ಥಾನದಲ್ಲಿರಿಸುವಿರಿ ಹಾಗೂ ಇನ್ನೊಂದರಲ್ಲಿ ಒಪ್ಪದಂಥ (=ಅಸ್ವೀಕಾರ್ಯ) ಸ್ಥಳದಲ್ಲಿರಿಸುವಿರಿ. ಸ್ವೀಕರಿಸಬಹುದಾದ ನಿಷೇಧಾರ್ಥಕ ವಾಕ್ಯದ ವಿಷಯಕ್ಕೆ ಮಿದುಳಿನ ಭಾಷಾ ಭಾಗದಲ್ಲಿ ಚಟುವಟಿಕೆ(ಸಕ್ರಿಯತೆ) ಕಂಡುಬಂದಿತು. ಆದರೆ ಅದೇ ಸಾರ್ವಭೌಮಿಕ ವ್ಯಾಕರಣದ ನಿಯಮಗಳನ್ನು ಉಲ್ಲಂಘಿಸುತ್ತಿದ್ದ ಸ್ವೀಕರಿಸಲಾಗದ ವಾಕ್ಯಗಳ ವಿಷಯಕ್ಕೆ ಮಿದುಳಿನಲ್ಲಿ ಯಾವುದೇ ಚಟುವಟಿಕೆ(ಕ್ರಿಯಾಶೀಲತೆ) ಕಂಡುಬರಲಿಲ್ಲ ಬರಲಿಲ್ಲ ಎಂಬುದನ್ನು ಮಿಲಾನ್ ತಂಡ ಕಂಡುಕೊಂಡಿತು. [ವ್ಯಾಕರಣದ ನಿಯಮಗಳನ್ನು ಉಲ್ಲಂಘಿಸುವ ಅಸ್ವೀಕಾರ್ಯ ವಾಕ್ಯದೊಂದಿಗೆ, ಸಾರ್ವಭೌಮಿಕ ವ್ಯಾಕರಣದ ನಿಯಮಗಳನ್ನು ಉಲ್ಲಂಘಿಸುವ ಕಡೆ ಮಸ್ತಿಠದಲ್ಲಿ ಯಾವುದೇ ಸಕ್ರಿಯತೆ ಉಂಟಾಗುವುದಿಲ್ಲ.] ಇದರರ್ಥ ಅಸ್ವೀಕಾರ್ಯವಾದ ವಾಕ್ಯಗಳೊಂದಿಗೆ ಭಾಷೆಯ ಹಾಗಲ್ಲದೆ ಒಂದು ಒಗಟಿನ ರೀತಿಯಲ್ಲಿ ಜನ ಆಟವಾಡುತ್ತಿದ್ದರು. (ಚೆಲ್ಲಾಟವಾಡುತ್ತಿದ್ದರು) ಇದೊಂದು ಆರಂಭಿಕ ಪರಿಣಾಮವಷ್ಟೆ. ಆದರೆ ಭರವಸೆಗೂ ಇಚ್ಛೆಗೂ ಇರುಷ್ಟೇ ಗಾಢವಾದ ಸಂಬಂಧ ಭಾಷೆಗಳ ಪರೀಕ್ಷೆಯಿಂದ ಹೊರಹೊಮ್ಮುವ ಸಿದ್ಧಾಂತಗಳಿಗೂಮಿದುಳಿನ ಕ್ರಿಯಾಶಿಲತೆಗೂ ಇದೆಎಂಬುದನ್ನು ಇದು ಸ್ಪಷ್ಟವಾಗಿ ಸೂಚಿಸುತ್ತಿದೆ. .

**ಪ್ರಶ್ನೆ:** ಇತ್ತೀಚೆಗಿನ ಅನುವಂಶಿಕ ಅಧ್ಯಯನಗಳೂ ಭಾಷೆ ಕುರಿತಾಗಿ ತುಸು ಇದೇ ತೆರನಾದ ಸೂಚನೆಗಳನ್ನು/ ನೀಡುತ್ತಿವೆ ಇದು ಸರಿಯೇ?

**ಚಾಮಸ್ಕಿ:** ಇತ್ತೀಚೆಗೆ (ಇತ್ತೀಚಿನ ವರ್ಷಗಳಲ್ಲಿ) ಫಾಕ್ಸ್ ಪೀ2 ಎಂಬೊಂದು ಜೀನ್‌ನ್ನು ಕಂಡು ಹಿಡಿಯಲಾಗಿದೆ. ಇದು ಸಾಕಷ್ಟು ಆಕರ್ಷಕವಾಗಿ ಕೂಡ ಇದೆ. ಕಾರಣ ಇದರಲ್ಲಿ ಯಾವುದೇ ರೀತಿಯ ಬದಲಾವಣೆ(ವ್ಯತ್ಯಯ) (Mutation) ಆದಲ್ಲಿ ಭಾಷಾ ಬಳಕೆಗೆ (=ಪ್ರಯೋಗದಲ್ಲಿನ) ಸಂಬಂಧಿಸಿದ ದೌರ್ಬಲ್ಯಗಳು ಕಾಣಿಸಿಕೊಳ್ಳತೊಡಗುತ್ತವೆ. ಈ ಜೀನನ್ನು ನಾವು ಆರೋಫೇಷಿಯಲ್ ಆಕ್ಟಿವೇಷನ್ ಎನ್ನುವೆವಲ್ಲ ಅಂದರೆ ನಾವು ಮಾತನಾಡುವಾಗ ನಮ್ಮ ಬಾಯಿ, ಮುಖ, ಮತ್ತು ನಾಲಿಗೆಯನ್ನು ನಿಯಂತ್ರಿಸಿಕೊಳ್ಳುತ್ತೇವಲ್ಲ ಆ ಕ್ರಿಯೆ ಯೊಂದಿಗೆ ಜೋಡಿಸಲಾಗುತ್ತದೆ. ಆದುದರಿಂದ ಫಾಕ್ಸ್ ಫೀ2ಗೆ ಬಹುಶಃ ಭಾಷೆಯ ಬಳಕೆಯೊಂದಿಗೆ ಏನೋ ಸಂಬಂಧವಿದೆ ಅನಿಸುತ್ತದೆ. ಈ ಜೀನ್ ಮನುಷ್ಯರಿಗಷ್ಟೇ ಸೀಮಿತವಾಗಿರದೆ ಇನ್ನೂ ಎಷ್ಟೋ ಬೇರೆ ಪ್ರಾಣಿಗಳಲ್ಲೂ ಕಂಡುಬರುತ್ತದೆ, ಅಲ್ಲದೆ ಬೇರೆ-ಬೇರೆಯ ಜಾತಿಯ ಪ್ರಾಣಿಗಳಲ್ಲಿ ಬೇರೆ-ಬೇರೆ ರೀತಿಯಲ್ಲಿ ಕರ್ಯನಿರ್ವಹಿಸುತ್ತದೆ. ಆದರೆ ಈ ಅನ್ವೇಷಣೆಯಿಂದ ಭಾಷೆಯ ಕೆಲವೊಂದು ಮಗ್ಗುಲುಗಳಿಗೆ ಆನುವಂಶಿಕ ಆಧಾರವಿದೆ ಎಂಬುದನ್ನು ಸಮರ್ಥಿಸುವ ದಿಕ್ಕಿನಲ್ಲಿ ಇದನ್ನೊಂದು ಆರಂಭದ ಹೆಜ್ಜೆ ಎನ್ನಬಹುದಾಗಿದೆ.

**ಪ್ರಶ್ನೆ:** ಮನುಷ್ಯನಿಗೆ ಜನ್ಮಜಾತವಾಗಿ(=ಹುಟ್ಟಿನೊಂದಿಗೇ) ಬರುವ ಭಾಷಿಕ ಸಾಮರ್ಥ್ಯವು ಅವನ ಒಂದು ವಿಶಿಷ್ಟತೆ ಎಂದು ನೀವು ಹೇಳುತ್ತೀರಿ. ಆದರೆ ಫಾಕ್ಸ್ ಪೀ2 ಯ ನಿರಂತರತೆ ಇನ್ನೂ ಎಷ್ಟೋ (ಪ್ರಜಾತಿಗಳಲ್ಲಿ=) ಮನುಷ್ಯರ ವಿಭಿನ್ನ ಕುಲಗಳಲ್ಲಿ ಕಾಣಬರುತ್ತದೆ, ಈ ಎರಡೂ ಮಾತುಗಳು ಪರಸ್ಪರ ವಿರುದ್ಧವೆಂಬಂತಿವೆಯಲ್ಲವೆ?

**ಚಾಮ್‌ಸ್ಕಿ:** ಇದರಲ್ಲಿ ಪ್ರಜಾತಿಯ ನಿರಂತರತೆ ಇದೆಯೆನ್ನುವ ಮಾತು ಅರ್ಥಹೀನವಾದುದು (ನಿರರ್ಥಕ). ಮನುಷ್ಯನಲ್ಲಿನ ಭಾಷಿಕ ತಂತ್ರ, ಜೀನ್, ಸ್ನಾಯುವೇ ಮೊದಲಾದವುಗಳ ಮೇಲೆ ಆಧರಿತವಾಗಿದೆ ಎಂಬ ವಿಷಯದಲ್ಲಿ ಯಾರಿಗೂ ಸಂದೇಹವಿಲ್ಲ. ಭಾಷಾ ಬಳಕೆ(=ಪ್ರಯೋಗ), ತಿಳಿವು(= ಅರಿವು), ತನ್ನದಾಗಿಸಿಕೊಳ್ಳುವುದು(=ಅಧಿಗ್ರಹಿಸುವಿಕೆ) ಹಾಗೂ ರಚನೆಯಲ್ಲಿ ಸೇರಿರುವ್ಗ ಪದ್ಧತಿತಿಗಳು ಒಂದು ಹಂತದವರೆಗ್ಗೆ ಇಡೀ ಪ್ರಾಣಿ ಪ್ರಪಂಚದಲ್ಲಿ ಕಾಣಬರುತ್ತದೆ. ಕೆಲವನ್ನಂತೂ ನೀವು ಜೀವಾಣುಗಳಲ್ಲಿ ಕೂಡ ನೋಡುತ್ತೀರಿ. ಆದರೆ ಈ ಮಾತು ಇವುಗಳ ವಿಕಾಸ (ಬೆಳವಣಿಗೆ) ಅಥವಾ ಇವೆಲ್ಲ ಒಂದೇ ತೆರನಾದ ಮೂಲದಿಂದ ಹುಟ್ಟಿದವೆಂಬ ಸೂಚನೆಯನ್ನು ನೀಡುವುದಿಲ್ಲ. .ಭಾಷೆಯ ಹುಟ್ಟಿನಂಥ ವಿಶಿಷ್ಟ ವಿಷಯದಲ್ಲಿ ಮನುಷ್ಯನಿಗೆ ಅತ್ಯಂತ ಹತ್ತಿರಬರುವಂಥ ಯಾವುದಾದರೂ ಜೀವಜಂತು ಇದೆಯೆನ್ನುವುದಾದರೆ ಅದು ಪಕ್ಷಿಕುಲ. ಆದರೆ ಈ ಕಾರಣಕ್ಕಾಗಿ ಸಮಾನ ಮೂಲವಲ್ಲ. ಇದೊಂದು ಬೇರೆಯೇ ಆದ ವಿದ್ಯಮಾನ. ನಾವದನ್ನು ಏಕಾಗ್ರಮುಖತೆ(=ಅಭಿಸರಣ) (Convergence) ಎಂದು ಹೇಳುತ್ತೇವೆ- ಸರಿಸುಮಾರು ಒಂದೇ ತೆರನಾದ ವ್ಯವಸ್ಥೆಗಳು ಬೇರೆ-ಬೇರೆಯಾಗಿ ವಿಕಾಸಗೊಳ್ಳುವುದು. ಫಾಕ್ಸಪಿ2 ವಿಶೇಷ ಆಕರ್ಷಕವಾಗಿದೆಯಾದರೂ ಇದು ಬಹುತೇಕ ಭಾಷೆಯ ಅಂಚಿನಲ್ಲಿರುವ ಸಂಗತಿಗಳಾದ ಭಾಷೆಯ ಉತ್ಪತ್ತಿಯಂಥ (=ಹುಟ್ಟು) ಸಂಗತಿಗಳನ್ನು ನಿರ್ಧರಿಸುತ್ತದೆ. . ಇದನ್ನು ಕುರಿತಾಗಿ ನಡೆಯುತ್ತಿರುವ ಶೋಧ ಕಾರ್ಯವೇನೇ ಇದ್ದರೂ ಭಾಷಾ ವಿಜ್ಞಾನದ ಸಿದ್ಧಾಂತಗಳ ಮೇಲೆ ಅದರ ಪ್ರಭಾವ ಬೀಳುವ ಸಾಧ್ಯತೆ ತೀರಾ ಕಡಿಮೆ.(=ಭಾಷಾ ವಿಜ್ಞಾನದ ಸಿದ್ಧಾಂತಗಳ ಮೇಲೆ ಹೆಚ್ಚಿನ ಪ್ರಭಾವ ಬೀಳುವಂತೆನಿಸುವುದಿಲ್ಲ.)

**ಪ್ರಶ್ನೆ:** ಕಳೆದ ೨೦ ವರ್ಷಗಳಿಂದಲೂ ನೀವು ಭಾಷೆಯ ನ್ಯೂನತಮವಾದದತಿಳಿವಿನ ಬಗೆಗೆ ಕಾರ್ಯ ನಿರ್ವಹಿಸುತ್ತಿರುವಿರಿ. ಇದರ ಅವಶ್ಯಕತೆಗಳೇನಿವೆ?

**ಚಾಮ್‌ಸ್ಕಿ:** ಭಾಷೆಯನ್ನು ಮಂಜಿನ ಒಂದು ಪದರದಂತೆ ಎಂದು ಇಟ್ಟುಕೊಳ್ಳಿ.(=ಭಾವಿಸಿ) ಇದು ಪ್ರಾಕೃತಿಕ ನಿಯಮಕ್ಕನುಗುಣವಾಗಿ ಆಕಾರ ಪಡೆಯುತ್ತದೆ. ಅದು ಹೊರಗಿನ ನಿರ್ಧಾರಕರನ್ನು ಸಂತುಷ್ಟ ಪಡಿಸುವಂಥದುv. ಭಾಷೆಯ ಅನ್ವೇಷಣೆಯನ್ನು ಕುರಿತಂತಹ ಈ ದೃಷ್ಟಿಕೋನವನ್ನು ನ್ಯೂನತಮವಾದಿ ಕಾರ್ಯಕ್ರಮ ಅಂದರೆ (Minimalist Program) ಎಂದು ಹೇಳುತ್ತಾರೆ. ಈ ಕಾರ್ಯಕ್ರಮದಿಂದಾಗಿ ಕೆಲವು ಶ್ರೇಷ್ಠ

ಪರಿಣಾಮಗಳು ಮೂಡಿಬಂದಿವೆಯೆಂದು ನನಗನಿಸುತ್ತದೆ. ಇದರಿಂದಾಗಿ ಭಾಷೆ ನಿಶ್ಚಿತವಾಗಿ ಕೆಲವು ಶಬ್ದ-ಅರ್ಥಗಳಿಗೆ ಸಂಬಂಧಿಸಿದ P ಅಭಿವ್ಯಕ್ತಿಗಳನ್ನು ಅಂದರೆ ಅರ್ಥಗಳನ್ನು ತಿಳಿಸುವ ಒಂದು ಆದರ್ಶ ಇತ್ಯರ್ಥ(=ಉತ್ತರ). (ನಿರ್ಣಯವೆಂದೂ). ಆದರೆ ಸ್ಪಷ್ಟ ಅಭಿವ್ಯಕ್ತಿಯ ದೃಷ್ಟಿಯಿಂದ ಅದರ ವಿನ್ಯಾಸ(=ಡಿಸೈನ್) ಬಹಳ ಕೆಟ್ಟದ್ದಾಗಿದೆ. ಅಂದರೆ ವಿಶಿಷ್ಟವಾದ ಧ್ವನಿ ಎತ್ತಿ ನೀವು ಇದನ್ನು 'ಬೇಸ್‌ಬಾಲ್' ಎನ್ನಬಹುದು. ಅದನ್ನು ನಾವು 'ಪ್ಯಾಡ್' ಎನ್ನುವುದಿಲ್ಲ ಎಂದು ಹೇಳಬಹುದು.

**ಪ್ರಶ್ನೆ:** ಭಾಷಾ ವಿಜ್ಞಾನದ ಎದುರುಇರುವ ದೊಡ್ಡ ಪ್ರಶ್ನೆಗಳು ಯಾವು?

**ಚಾಮಸ್ಕಿ:** ಇನ್ನೂ ಎಷ್ಟೋ ಪ್ರಶ್ನೆಗಳಿಗೆ ಜವಾಬು ಹುಡುಕುವುದಿದೆ. (ಹುಡುಕುವುದು ಬಾಕಿ ಇದೆ). ಕೆಲವು ಪ್ರಶ್ನೆಗಳು ಭಾಷೆ ಎಂದರೇನು? ಎಂಬಂತೆ'ಏನು' ಎಂಬುದರಿಂದ ಶುರುವಾಗುವಂಥವು. ಉದಾ; ಈ ಸಮಯದಲ್ಲಿ ನಾನು-ನೀವು ಏನು ಮಾಡುತ್ತಿದ್ದೇವೆ ª ಅದರ ನಿಯಮ ಮತ್ತು ಸಿದ್ಧಾಂತಗಳೇನು?. ಇನ್ನು ಕೆಲವು ಪ್ರಶ್ನೆಗಳು 'ಹೇಗೆ' ಎಂಬುದರಿಂದ ಶುರುವಾಗುತ್ತವೆ. 'ನೀವು ಮತ್ತು ನಾನು ಈ ಸಾಮರ್ಥ್ಯವನ್ನು (=ಯೋಗ್ಯತೆಯನ್ನು) ಹೇಗೆ ಸಂಪಾದಿಸಿಕೊಂಡೆವು. ನಮ್ಮ ವಂಶಪಾರಂರ್ಯವಾಗಿ ಬಂದ ಭಂಡಾರ ಮತ್ತು ಅನುಭವಗಳಲ್ಲಿ ಹಾಗೂ ಪ್ರಕೃತಿಯ ನಿಯಮಗಳಲ್ಲಿ ಅಂತಹವುದೇನಡಗಿದೆ? ಇದರ ನಂತರ 'ಏತಕ್ಕೆ?' ಎನ್ನುವುದರ ಮುಖಾಂತರ ಪ್ರಶ್ನೆಗಳೇಳುತ್ತವೆ. ಆ ಪ್ರಶ್ನೆಗಳು ಬಹಳ ಕಠಿಣವಾದುವು; ಭಾಷಾ ನಿಯಮಗಳು ಹೀಗೆಯೇ ಏಕಿವೆ? ಬೇರೆಯ ರೀತಿಯಲ್ಲೇಕಿಲ್ಲ? ಭಾಷೆಯ ಮೂಲಭೂತ ಸ್ವರೂಪ ಬೇರೆ ರೀತಿಯಲ್ಲೇಕಿಲ್ಲ? ಭಾಷೆಯು ಅಪರಿಹಾರ್ಯವೆನ್ನುವ ರೀತಿಯಲ್ಲಿ ಪೂರ್ತಿಗೊಳಿಸುವ ಶರತ್ತುಗಳಿಗನುಗುಣವಾಗಿ ಭಾಷೆ ತಳಹದಿ ರೂಪದ ಡಿಸೈನ್, ಉತ್ತರವನ್ನು(=ಪರಿಹಾರವನ್ನು) ಮುಂದಿಡುತ್ತದೆ. º ಇದೊಂದು ದೊಡ್ಡ ಸಮಸ್ಯೆಯೇ. ಭಾಷೆಯ ಪ್ರಕೃತಿ ಕುರಿತಾಗಿ ನಮಗೆ ತಿಳಿದಿರುವುದನ್ನು ನಾವು ನಮ್ಮ (ಮೆದುಳಿನಲ್ಲಿ) ತಲೆಯಲ್ಲಿ ನಡೆಯುವ ಕ್ರಿಯೆಗಳೊಂದಿಗೆಯಾವ ಹಂತದವರೆಗೆ ಜೋಡಿಸಿ ನೋಡಬಲ್ಲೆವು?? ಇನ್ನು(ಕೊನೆಯಲಿ=) ಅಂತಿಮವಾಗಿ ಭಾಷೆಯ ಅನುವಂಶಿಕ ಆಧಾರ ಕುರಿತು ಏನಾದರೂ ಗಂಭೀರವಾದ ಶೋಧನೆ ನಡೆದಿದೆಯೇ? ಈ ಎಲ್ಲಾ ಅಂಶಗಳನ್ನು ಕುರಿತಂತೆಯೂ ಪ್ರಗತಿ ಕಂಡುಬರುತ್ತದೆ. ಆದರೂ ಇಂದಿಗೂ ಬಹುದೊಡ್ಡ ಖಾಲಿಜಾಗಗಳು ಉಳಿದುಕೊಂಡಿವೆ. ಇದೆ.

**ಪ್ರಶ್ನೆ:** ಪ್ರತಿಯೊಬ್ಬ ತಂದೆ-ತಾಯಿಯೂ ಮಕ್ಕಳು ಭಾಷೆಯನ್ನು ಹೇಗೆ ಕಲಿಯುತ್ತಾರೆಂದು ಚಕಿತಗೊಳ್ಳುತ್ತಾರೆ. ಈ P ಪ್ರಕ್ರಿಯೆ ಕುರಿತಂತೆ ನಮಗಿನ್ನೂ ಬಹಳ ಕಡಿಮೆ ತಿಳಿದಿದೆಯೆಂಬ ವಿಷಯ ನಂಬಲಾಗದುದೆನಿಸುತ್ತದೆ.

**ಚಾಮ್‌ಸ್ಕಿ:** ಹುಟ್ಟುವಾಗ ಮಗುವಿಗೆ ತನ್ನ ತಾಯಿ ಮಾತನಾಡುವ ಭಾಷೆಯ ಬಗೆಗೆ ಬಹಳ ಕಡಿಮೆ ತಿಳಿದಿರುತ್ತದೆ ಎಂಬುದು ನಮಗೆಲ್ಲರಿಗೂ

ತಿಳಿದಿದೆ. ಎರಡು ಭಾಷೆಗಳನ್ನು ಬಲ್ಲಂತಹ ಯಾವುದಾದರೊಬ್ಬ ಮಹಿಳೆ ಆ ಮಗುವಿನೆದುರಿಗೆ ಮಾತನಾಡಿದಾಗ ತನ್ನ ಮಾತೃಭಾಷೆ ಮತ್ತು ಮತ್ತೊಂದು ಭಾಷೆಯ ನಡುವಣ ವ್ಯತ್ಯಾಸ ಅದಕ್ಕೆ ತಿಳಿಯುತ್ತದೆ.(ವ್ಯತ್ಯಾಸವನ್ನು ಅದು ತಿಳಿದುಕೊಳ್ಳಬಲ್ಲುದು)(ಅವನ=) ಅದರ ಸುತ್ತಣ ಪರಿಸರದಲ್ಲಿ ಎಷ್ಟೋ ಸಂಗತಿಗಳು ನಡೆಯುತ್ತಿvರುತ್ತವೆ. ಅದನ್ನು ವಿಲಿಯಮ್ ಜೇಮ್ಸ್ 'ಏರುವ-ಉಕ್ಕುವ ವಿಭ್ರಮ' ಎನ್ನುತ್ತಾರೆ. ಆದರೆ ಮಗು ಹೇಗೋ ಇಂತಹ ಜಟಿಲ(+ತೊಡಕಿನ)P ವಾತಾವರಣದಲ್ಲಿ ಭಾಷೆಗೆ ಸಂಬಂಧಿಸಿದ ತಥ್ಯಗಳನ್ನು(ವಿಷಯಗಳನ್ನು) ಸ್ವತಃ ತಾನೇ ಆರಿಸಿಕೊಳ್ಳುತ್ತದೆ. ಮತ್ಯಾರೂ ಆ ಕೆಲಸವನ್ನು ಮಾಡಲಾಗುವುದಿಲ್ಲ. ಚಿಂಪಾಂಜಿಯೊಂದು ಆ ಕೆಲಸ ಮಾಡಲಾಗುವುದಿಲ್ಲ ಮತ್ತು ಮಗು ಬೇಗನೇ ಸ್ವತಃ ತನಗಾಗಿ ಒಂದು ಆಂತರಿಕ ತಂತ್ರವನ್ನು ಪಡೆದುಕೊಳ್ಳುವ ದಿಕ್ಕಿನಲ್ಲಿ ಮುಂದುವರಿಯುತ್ತದೆ. ಈ ತಂತ್ರ ಕೊನೆಗೆ ನಾವೀಗ ಬಳಸುತ್ತಿರುವ ಂಸಾಮರ್ಥ್ಯದ ರೂಪದಲ್ಲಿ ಪ್ರಕಟವಾಗುತ್ತದೆ. ಮಗುವಿನ ತಲೆಯಲ್ಲೇನು (=ಮಿದುಳಿನಲ್ಲೇನು) ನಡೆಯುತ್ತಿದೆ? ಮಾನವ ಜೀನೋಮ್‌ನ ಯಾವ ತತ್ವಗಳು ಈ ಪ್ರಕ್ರಿಯೆಯಲ್ಲಿ ಸಹಕಾರಿಯಾಗಿವೆ? ಇವೆಲ್ಲಾ ಹೇಗೆ ಬೆಳವಣಿಗೆಹೊಂದುತ್ತವೆ? ಈ ವಿಷಯಗಳನ್ನೆಲ್ಲಾ ಸರಿಯಾಗಿ ಇನ್ನೂ ಅರ್ಥಮಾಡಿಕೊಳ್ಳಬೇಕಾಗಿದೆ.

**ಪ್ರಶ್ನೆ:** ಹೆಚ್ಚು ಉನ್ನತ ಸ್ತರದಲ್ಲಿ ಅರ್ಥಕ್ಕೆ ಸಂಬಂಧಿಸಿದಂತೆ ಏನು ಹೇಳುತ್ತೀರಿ? ಮಹಾ ಗಾಥೆಗಳನ್ನು ಜನ ಪೀಳಿಗೆಯಿಂದ ಪೀಳಿಗೆಗೆ ಹಾಡುತ್ತಾ ಬಂದಿದ್ದಾರಲ್ಲ, ಅವುಗಳಲ್ಲಿನ ಸಂಗತಿಗಳನ್ನು ಮತ್ತೆ ಮತ್ತೆ ಪುನರಾವರ್ತಿಸಲಾಗುತ್ತದೆ. ಈ ಪುನರಾವರ್ತನೆ ಮನುಷ್ಯನ ಹುಟ್ಟಿನ ಜೊತೆಯಲ್ಲೇ ಬರುವ ಭಾಷೆಯಯ ಬಗ್ಗೆ ಏನಾದರೂ ಸೂಚನೆ ಕೊಡುತ್ತದೆಯೆ?

**ಚಾಮ್‌ಸ್ಕಿ:** £ ಎಲ್ಲರಿಗೂ ಚಿರಪರಿಚಿತವಾಗಿರುವ ದೇವ ಕನ್ನಿಕೆಯರ (ಅಪ್ಸರೆಯರ) ಕತೆಗಳಲ್ಲೊಂದು ನಮಗೆಲ್ಲಾ ತಿಳಿದಿದೆ. .ಅದು ಸುಂದರವಾದೊಬ್ಬ ರಾಜಕುಮಾರನ ಕತೆ.. ದುಷ್ಟ ಮಾಟಗಾತಿಯೊಬ್ಬಳು ಅವನನ್ನು ಒಂದು ಕಪ್ಪೆಯಾಗಿ ಪರಿವರ್ತಿಸಿ ಬಿಡುತ್ತಾಳೆ. ಕತೆಯ ಕೊನೆಯಲ್ಲಿ ಸುಂದರಳಾದೊಬ್ಬ ರಾಜಕುಮಾರಿ ಬಂದು ಆ ಕಪ್ಪೆಗೆ ಮುದ್ದಿಡುತ್ತಾಳೆ. ನಂತರ ಅದು ರಾಜಕುಮಾರನಾಗಿ ಪರಿವರ್ತನೆಗೊಳ್ಳುತ್ತದೆ. ಪ್ರತಿಯೊಂದು ಮಗುವಿಗೂ ಆ ಕಪ್ಪೆ ವಾಸ್ತವವಾಗಿ ಒಬ್ಬ ರಾಜಕುಮಾರನಾಗಿತ್ತೆಂದು ತಿಳಿದಿರುತ್ತದೆ. ಆದರೆ ಅದಕ್ಕೆ ಇದು ತಿಳಿಯುವುದು ಹೇಗೆ? ಅದು ಪ್ರತಿ ದೈಹಿಕ ಗುಣದ ಲೆಕ್ಕಚಾರದ ಪ್ರಕಾರ ಅದೊಂದು ಕಪ್ಪೆಯೇ. ಅದನ್ನು ರಾಜಕುಮಾರನನ್ನಾಗಿ ಬದಲಾಯಿಸುವ ಸಂಗತಿ ಯಾವುದು? ಇಲ್ಲೊಂದು ನಿಯಮ ಕೆಲಸ ಮಾಡುತ್ತಿದೆ. ಜನರು, ಜಂತುಗಳು ಹಾಗೂ ಮಿಕ್ಕ ಬದುಕಿರುವ ಜೀವಿಗಳನ್ನು ನಾವು ಅವರ ಒಂದು ಗುಣದಿಂದ ಅರಿಯುತ್ತೇವೆ. ಅದನ್ನು ಮನೋವೈಜ್ಞಾನಿಕ ಸಾತತ್ಯ (Psychic continuities) ಎನ್ನುತ್ತಾರೆ. ಮಕ್ಕಳು ಅದನ್ನು ಒಂದು ರೀತಿಯ

ಮಿದುಳಿನ ಅಥವಾ ಆತ್ಮದ ಅಥವಾ ಒಂದು ಆಂತರಿಕ (=ಒಳಗಣ) ತತ್ವದ ರೂಪದಲ್ಲಿ ಗುರುತಿಸುತ್ತಾರೆ. ಅದು ಅವರ ಭೌತಿಕ ಗುಣವಾಗಿರದೆ ಸ್ವತಂತ್ರವಾದ್ದಾಗಿರುತ್ತದೆ. ವಿಜ್ಞಾನಿಗಳು ಈ ಮಾತನ್ನು ನಂಬುವುದಿಲ್ಲ. ಆದರೆ ಪ್ರತಿಯೊಂದು ಮಗು (ಶಿಶು) ನಂಬುತ್ತದೆ ಮತ್ತು ಪ್ರತಿಯೊಬ್ಬ ಮನುಷ್ಯನಿಗೂ ಈ ರೀತಿಯಲ್ಲಿ ಪ್ರಪಂಚವನ್ನು ಹೇಗೆ ವ್ಯಾಖ್ಯಾನಿಸಬಹುದೆಂದು ತಿಳಿದಿರುತ್ತದೆ.

**ಪ್ರಶ್ನೆ:** ನಿಮ್ಮ ಮಾತುಗಳಿಂದ ಭಾಷಾ ವಿಜ್ಞಾನದ ವಿಜ್ಞಾನ ಇದೀಗ ಶುರುವಾಗಿದೆ ಎನಿಸುತ್ತದೆ.

**ಚಾಮ್‌ಸ್ಕಿ:** ಭಾಷೆಯ ಬಗೆಗೆ ಎಷ್ಟೋ ಇಂತಹ ಸರಳವಾದ ವಿವರಣಾತ್ಮಕ ಸತ್ಯಾಂಶಗಳಿವೆ. ಅವೆಲ್ಲಾ ಅರ್ಥಮಾಡಿಕೊಳ್ಳಲಾಗಿಲ್ಲದವು. ಉದಾಹರಣೆಗೆ ಹೇಳುವಾದಾದರೆ, ವಾಕ್ಯಗಳು ತಮ್ಮ ಅರ್ಥವನ್ನು ಹೇಗೆ ಪಡೆಯುತ್ತವೆ? ಅವುಗಳ ದನಿ(=ಶಬ್ದ) ಹೇಗಾಗುತ್ತದೆ? ಬೇರೆಯವರು (ಇತರರು) ಅದನ್ನು ಯಾವ ರೀತಿ ಅರ್ಥ ಮಾಡಿಕೊಳ್ಳುತ್ತಾರೆ? ಭಾಷೆಯು ಸಂಗಣನೆಯಲ್ಲಿ (Computation) ಒಂದು ರೇಖಾಕ್ರಮವನ್ನೇಕೆ (Linear Order)ನ ಅನುಸರಿಸುವುದಿಲ್ಲ? ಒಂದು ಸರಳ ವಾಕ್ಯವನ್ನೇ ಉದಾಹರಣೆಯಾಗಿ ತೆಗೆದುಕೊಂಡರೆ 'ಹಾರುತ್ತಿರುವ ಹದ್ದುಗಳು ಈಜುತ್ತಿವೆಯೇನು?' ಎಂಬ ವಾಕ್ಯ ನಿಮಗೆ ಅರ್ಥವಾಗುತ್ತದೆ. ಪ್ರತಿಯೊಬ್ಬರಿಗೂ ಇದು ಅರ್ಥವಾಗುತ್ತದೆ.ಒಂದು ಮಗು ಇದನ್ನು -ಹದ್ದುಗಳು ಈಜಬಲ್ಲವೇನು (ಈಜುತ್ತವೇನು)? ಎಂಬ ಪ್ರಶ್ನೆಯ ರೂಪದಲ್ಲಿ ತೆಗೆದುಕೊಳ್ಳುತ್ತದೆ. ಪ್ರಶ್ನೆಯಲ್ಲಿ ಅವು ಹಾರಬಲ್ಲವೇನು (ಹಾರುತ್ತವೇನು)? ಎಂದು ಕೇಳುತ್ತಿಲ್ಲ. 'ಹಾರುತ್ತಿರುವ ಹದ್ದುಗಳು ಈಜುತ್ತವೇನು?' ಎಂದು ನೀವು ಹೇಳಬಹುದು. ಹಾರುತ್ತಿರುವ ಹದ್ದುಗಳು ಈಜುತ್ತವೇನು? ಎಂದು ಇದನ್ನು ಪರಿಗಣಿಸಬೇಕೆ.ಇವು ಪ್ರತಿಯೊಬ್ಬರಿಗೂ ಗೊತ್ತಿರುವಂಥ ನಿಯಮಗಳು, ಯೋಚಿಸಿ ನೋಡದೆಯೇ ಅದರರ್ಥ ತಿಳಿಯುತ್ತದೆ. ಆದರೆ ಹಾಗೇಕೆ? ಎಂಬುದು ಇಂದಿಗೂ ಒಂದು ರಹಸ್ಯವೇ. ಈ ನಿಯಮಗಳು ಎಲ್ಲಿಂದ ಹುಟ್ಟಿಕೊಂಡವೆಂಬುದು ಇನ್ನೂ ತಿಳಿದಿಲ್ಲ.

"ಭಾಷೆ ನಮ್ಮ ಅಸ್ತಿತ್ವದ ಮೂಲ"- ಶೈಕ್ಷಣಿಕ ಸಂದರ್ಭ ಸಂಚಿಕೆ ೪೪ (ಮೂಲ: ಸಂಚಿಕೆ ೧೦೧, ಪುಟ-೨೩-೩೨೧